## ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1276

ಉತ್ತರಿಸಬೇಕಾದ ದಿನಾಂಕ : 17.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಇಲಾಖೆ ವತಿಯಿಂದ ರೈತರ ಸಾಲಮನ್ನಾ ಯೋಜನೆ ಮುಂದುವರೆದಿಯೇ; | ಸಹಕಾರ ಇಲಾಖೆಯಿಂದ ಹೊಸದಾಗಿ ಸಾಲ ಮನ್ನಾ ಯೋಜನೆ ಜಾರಿಮಾಡಿರುವುದಿಲ್ಲ. 2018-19 ರಲ್ಲಿ ದಿ.10-7-2018 ಕ್ಕೆ ಬಾಕಿ ಹೊಂದಿದ ರೈತರಿಗೆ ಜಾರಿ ಮಾಡಿದ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಗೆ ಸರ್ಕಾರ 2019-20 ರಲ್ಲಿ ರೂ.6150 ಕೋಟಿಗಳ ಆಯವ್ಯಯ ಅವಕಾಶ ಕಲ್ಪಿಸಿದ್ದು, ಮಾರ್ಚ್ 2020 ರೊಳಗೆ ಬಾಕಿ ರೈತರಿಂದ ಅರ್ಜಿ ಪಡೆಯುವ ಕಾರ್ಯವನ್ನು ಪೂರ್ಣ ಗೊಳಿಸಲು ತೀರ್ಮಾನಿಸಲಾಗಿದೆ. |
| ಆ) | ಇದುವರೆಗೆ ಎಷ್ಟು ರೈತರ ಸಾಲ ಮನ್ನಾ ಮಾಡಲಾಗಿದೆ; ಅದರ ಒಟ್ಟು ಮೊತ್ತವೆಷ್ಟು; | ಸಾಲ ಮನ್ನಾ ಯೋಜನೆಯಲ್ಲಿ ಸಹಕಾರ ಸಂಘಗಳು ತಂತ್ರಾಂಶದಲ್ಲಿ ಅಳವಡಿಸಿರುವ 18.32 ಲಕ್ಷ ರೈತರ ಪೈಕಿ ಈಗಾಗಲೇ 16.01 ಲಕ್ಷ ರೈತರಿಗೆ ರೂ.7434.21 ಕೋಟಿ ಸಾಲ ಮನ್ನಾ ನೀಡಲು ಅರ್ಹತೆಯನ್ನು ಗುರುತಿಸಲಾಗಿದೆ. ಈ ಪೈಕಿ ಇದುವರೆಗೆ 15.70 ಲಕ್ಷ ರೈತರಿಗೆ ರೂ.7257.40 ಕೋಟಿಗಳನ್ನು NEFT ಮೂಲಕ ರೈತರ ಉಳಿತಾಯ ಖಾತೆಗೆ ಬಿಡುಗಡೆ ಮಾಡಲಾಗಿದೆ. |
| ಇ) | ರಾಜ್ಯದಲ್ಲಿ ಇನ್ನೂ ಎಷ್ಟು ರೈತರ ಸಾಲ ಮನ್ನಾ ಮಾಡಬೇಕಾಗಿದೆ; | ಉಳಿದ 2,30,990 ರೈತರ ಸಾಲ ಮನ್ನಾ ಅರ್ಹತೆ ಗುರುತಿಸಲು ಬಾಕಿ ಇದ್ದು, ಈ ಪೈಕಿ 70,497 ರೈತರು ಅರ್ಹತೆ ಹೊಂದುವ ದಾಖಲಾತಿಗಳನ್ನು ಸಲ್ಲಿಸಿದ್ದು, ಸಾಲ ಮನ್ನಾ ನಿಗದಿಪಡಿಸಿ ಅನುದಾನ ಬಿಡುಗಡೆ ಮಾಡಲು ಕ್ರಮ ಜರುಗಿಸಲಾಗುತ್ತಿದೆ.<br>ಉಳಿದ 1,60,493 ರೈತರ ಅರ್ಹತೆಯನ್ನು ಗುರುತಿಸಲು ಬಾಕಿ ಇದ್ದು, ಅರ್ಹತೆ ಗುರುತಿಸಲು ವಿಳಂಬಕ್ಕೆ ಕಾರಣಗಳನ್ನು ಈ ಕೆಳಗೆ ನೀಡಲಾಗಿದೆ. |

| ಕ್ರ.ಸಂ. | ಅನುದಾನ ಬಿಡುಗಡೆ ಮಾಡಲು ವಿಳಂಬಕ್ಕೆ ಕಾರಣಗಳು | ರೈತರ ಸಂಖ್ಯೆ |
|---|---|---|
| 1 | ರೇಷನ್ ಕಾರ್ಡ್ ಒದಗಿಸದಿರುವ ರೈತರ ಸಂಖ್ಯೆ | 69,749 |
| 2 | ಆಧಾರ್, ಆರ್‌ಟಿಸಿ ಮತ್ತು ರೇಷನ್ ಕಾರ್ಡ್ ತಪ್ಪಾಗಿ ನೀಡಿರುವುದರಿಂದ ಅರ್ಹತೆ ಗುರುತಿಸಲು ಬಾಕಿ ಇರುವ ರೈತರ ಸಂಖ್ಯೆ | 36,438 |
| 3 | ತಾಲ್ಲೂಕು ಮಟ್ಟದ ಸಮಿತಿಯಲ್ಲಿ ತಿರಸ್ಕರಿಸಿದ ರೈತರ ಸಂಖ್ಯೆ | 10,188 |
| 4 | ರೂ.1.00 ಲಕ್ಷಕ್ಕಿಂತ ಹೆಚ್ಚಿನ ಅಸಲು ಮತ್ತು ಸುಸ್ತಿ ಬಡ್ಡಿ ಪಾವತಿಸಲು ವಿಫಲವಾಗಿರುವುದರಿಂದ ಅರ್ಹತೆ ಹೊಂದದೆ ಇರುವ ರೈತರ ಸಂಖ್ಯೆ | 12,205 |
| 5 | ಬ್ಯಾಂಕಿನ ಮತ್ತು ಇಲಾಖಾ ಅಧಿಕಾರಿಗಳು ಪರಿಶೀಲಿಸಲು ಬಾಕಿ ಇರುವ ಮತ್ತು ರೈತರು ನೀಡಿರುವ ದಾಖಲೆಗಳನ್ನು ತಂತ್ರಾಂಶದಲ್ಲಿ ಅಳವಡಿಸದೇ ಇರುವ ರೈತರ ಸಂಖ್ಯೆ | 12,439 |
| 6 | ಆದಾಯ ತೆರಿಗೆ ಪಾವತಿದಾರರು, ವೇತನದಾರರು ಮತ್ತು ಪಿಂಚಣಿದಾರರಾಗಿರುವುದರಿಂದ ಮತ್ತು ಇತರೆ ಕಾರಣಗಳಿಗೆ ಅರ್ಹತೆ ಹೊಂದದೆ ಇರುವ ರೈತರ ಸಂಖ್ಯೆ | 19,474 |
| | **ಬಾಕಿ ಉಳಿದ ಒಟ್ಟು ಅರ್ಜಿಗಳು** | **1,60,493** |

| | | |
|---|---|---|
| | | ಯೋಜನೆಯಡಿ ಒಟ್ಟು 41867 ರೈತರುಗಳು ಸಾಲಮನ್ನಾ ಯೋಜನೆಯಡಿ ನಿಗಧಿಪಡಿಸಿದ್ದ ಮಾನದಂಡಗಳನ್ವಯ ಅನರ್ಹಗೊಂಡಿರುತ್ತಾರೆ. ಉಳಿದ 118626 ರೈತರುಗಳ ಸಂಬಂಧಿಸಿದ ದಾಖಲೆಗಳನ್ನು ಸಲ್ಲಿಸಿದ ನಂತರ ಪರಿಶೀಲಿಸಿ ಸಾಲ ಮನ್ನಾ ಬಿಡುಗಡೆ ಮಾಡಲು ಕ್ರಮಕೈಗೊಳ್ಳಲಾಗುತ್ತಿದೆ. |
| ಈ) | ಸಾಲ ಪಡೆದಿರುವ ರೈತರಿಂದ ಈಗ ಬಲವಂತವಾಗಿ ಸಾಲ ವಸೂಲಿ ಮಾಡಲಾಗುತ್ತಿದೆಯೇ; ಹಾಗಿದ್ದಲ್ಲಿ ಕಾರಣಗಳೇನು? | ಪಿಕಾರ್ಡ್ ಬ್ಯಾಂಕುಗಳಿಂದ ಸಾಲ ನೀಡಿ ಸುಸ್ತಿಯಾದ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳ ನಿಯಮಾನುಸಾರ ವಸೂಲಾತಿ ಪ್ರಕ್ರಿಯೆಯನ್ನು ಮಾಡಲಾಗುತ್ತಿತ್ತು.<br><br>ಪಿಕಾರ್ಡ್ ಬ್ಯಾಂಕುಗಳ ವಸೂಲಾತಿ ಪ್ರಮಾಣ ತೀವ್ರ ಪ್ರಮಾಣದಲ್ಲಿ ಕುಸಿದು ಹೊಸ ಸಾಲ ನೀಡಲು ನಬಾರ್ಡ್ ಸಂಸ್ಥೆಯಿಂದ ಪುನರ್ಧನ ದೊರೆಯದೇ ಇದ್ದುದರಿಂದ ಕಾನೂನು ಪ್ರಕಾರ ಸುಸ್ತಿ ಸಾಲಗಳ ವಸೂಲಾತಿಗೆ ದಿ.27-12-2019 ರಂದು ಸೂಚನೆ ನೀಡಿ. ದಿ:22-01-2020 ಈ ಸೂಚನೆಯನ್ನು ವಾಪಸ್ ಪಡೆಯಲಾಗಿದೆ.<br><br>ಮುಂದುವರೆದು ದಿ:31-1-2020 ಕ್ಕೆ ರೈತರು ಪ್ಯಾಕ್ಸ್ ಮತ್ತು ಪಿಕಾರ್ಡ್ ಬ್ಯಾಂಕುಗಳಲ್ಲಿ ಸುಸ್ತಿಯಾಗಿರುವ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲಗಳ ಅಸಲನ್ನು ದಿ:31-03-2020 ರೊಳಗಾಗಿ ಪಾವತಿಸಿದಲ್ಲಿ ಬಡ್ಡಿ ಮನ್ನಾ ಮಾಡುವ ಯೋಜನೆಯನ್ನು ಜಾರಿಗೊಳಿಸಲಾಗಿದೆ. |

**ಸಂಖ್ಯೆ : ಸಿಒ 131ಸಿಎಲ್ಎಸ್ 2020**

(ಎಸ್.ಟಿ ಸೋಮಶೇಖರ್)

ಸಹಕಾರ ಸಚಿವರು